ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತೊಂದನೆಯ ಅಧಿವೇಶನ
ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಅರಣ್ಯ ಇಲಾಖೆ ವ್ಯಾಪ್ತಿಯ ಪ್ರದೇಶದಲ್ಲಿ ಅಕ್ರಮ ಗಣಿಗಾರಿಕೆ ನಡೆಸುತ್ತಿರುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

79 (969) ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಅರಣ್ಯ ಇಲಾಖೆ ವ್ಯಾಪ್ತಿಯ ಪ್ರದೇಶಗಳಲ್ಲಿ ಅಕ್ರಮ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಈವರೆವಿಗೂ ಎಷ್ಟು ಪ್ರಕರಣಗಳು ದಾಖಲಾಗಿವೆ; ಮಂಡ್ಯ ಜಿಲ್ಲೆಯಲ್ಲಿ ಎಷ್ಟು ಪ್ರಕರಣಗಳು ದಾಖಲಾಗಿವೆ; (ತಾಲ್ಲೂಕುವಾರು ವಿವರವಾದ ಪ್ರಕರಣಗಳ ಮಾಹಿತಿ ನೀಡುವುದು)

(ಆ) ಕೃಷಿ ಅರಣ್ಯ ಪ್ರೋತ್ಸಾಹ ಸಹಾಯಧನ ನೀಡಲಾಗುತ್ತಿದೆಯೇ; ಹಾಗಿದ್ದಲ್ಲಿ ಮಂಡ್ಯ ಜಿಲ್ಲೆಯ ವಿವಿಧ ತಾಲ್ಲೂಕುಗಳಿಗೆ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಸಹಾಯಧನ ನೀಡಲಾಗಿದೆ; (ಫಲಾನುಭವಿಗಳ ಸಹಿತ ವಿವರವಾದ ಮಾಹಿತಿ ನೀಡುವುದು)

(ಇ) 2007 ರಿಂದ ಇಲ್ಲಿಯವರೆಗೆ ವಲಯ ಅರಣ್ಯಾಧಿಕಾರಿಗಳ ಜೇಷ್ಠತಾ ಪಟ್ಟಿ ಪ್ರಕಟಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈವರೆವಿಗೂ ಜೇಷ್ಠತಾ ಪಟ್ಟಿ ಪ್ರಕಟಿಸದಿರಲು ಕಾರಣವೇನು; ವಿಳಂಬಕ್ಕೆ ಕಾರಣರಾದವರ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ವಲಯ ಅರಣ್ಯಾಧಿಕಾರಿಗಳಿಂದ ಎ.ಸಿ.ಎಫ್. ಹುದ್ದೆಗೆ ಬಡ್ತಿ ನೀಡಿ ಎಷ್ಟು ವರ್ಷಗಳಾಗಿವೆ; ಅರ್ಹ ವಲಯ ಅರಣ್ಯಾಧಿಕಾರಿಗಳು ಬಡ್ತಿಯಿಂದ ವಂಚಿತರಾಗಿಲ್ಲವೆ; ಈ ಬಗ್ಗೆ ಸರ್ಕಾರದ ನಿಲುವೇನು?